

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 321 |
| ಸದಸ್ಯರ ಹೆಸರು | ಶ್ರೀ ಮರಿತಿಬ್ಬೇಗೌಡ (ಶಿಕ್ಷಕರಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 14.09.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಮಂಡ್ಯ ಜಿಲ್ಲೆಯಲ್ಲಿ ಪರವಾನಗಿ ಪಡೆದಿರುವ ಅಧಿಕೃತ ಹಾಗೂ ಅನಧಿಕೃತ ಗಣಿಗಾರಿಕೆಗಳ ಸಂಖ್ಯೆ ಎಷ್ಟು; (ಪೂರ್ಣ ವಿವರ ನೀಡುವುದು) | ಮಂಡ್ಯ ಜಿಲ್ಲೆಯಲ್ಲಿ ಪರವಾನಗಿ ಪಡೆದಿರುವ ಅಧಿಕೃತ ಕಲ್ಲುಗಣಿ ಗುತ್ತಿಗೆಗಳ ವಿವರ ಈ ಕೆಳಕಂಡಂತಿದೆ: |

| ತಾಲ್ಲೂಕು | ಉಪಖನಿಜದ ವಿಧ | ಒಟ್ಟು ಕಲ್ಲು ಗಣಿ ಗುತ್ತಿಗೆಗಳ ಸಂಖ್ಯೆ | ಕಲ್ಲು ಗಣಿ ಗುತ್ತಿಗೆ ವಿಸ್ತೀರ್ಣ (ಎ-ಗು) |
|---|---|---|---|
| ಮಂಡ್ಯ | ಕಟ್ಟಡ ಕಲ್ಲು | 08 | 33.20 |
| ಮದ್ದೂರು | ಕಟ್ಟಡ ಕಲ್ಲು | 16 | 27.17 |
| ಮಳವಳ್ಳಿ | ಕಟ್ಟಡ ಕಲ್ಲು | 02 | 10.00 |
| | ಅಲಂಕಾರಿಕ ಶಿಲೆ | 01 | 1.00 |
| ಶ್ರೀರಂಗಪಟ್ಟಣ | ಕಟ್ಟಡ ಕಲ್ಲು | 17 | 41.10 |
| | ಅಲಂಕಾರಿಕ ಶಿಲೆ | 01 | 2.00 |
| | ಫೆಲ್‌ಸ್ಪೈಟ್ | 01 | 3.14 |
| ಪಾಂಡವಪುರ | ಕಟ್ಟಡ ಕಲ್ಲು | 08 | 17.25 |
| ಕೆ.ಆರ್.ಪೇಟೆ | ಕಟ್ಟಡ ಕಲ್ಲು | 06 | 13.3 |
| | ಕ್ವಾರ್ಟ್ಜ್ | 01 | 9.00 |
| ನಾಗಮಂಗಲ | ಕಟ್ಟಡ ಕಲ್ಲು | 34 | 48.32 |
| | ಅಲಂಕಾರಿಕ ಶಿಲೆ | 02 | 12.00 |
| ಒಟ್ಟು | | **97** | **218.08** |

2020-21 ಹಾಗೂ 2021-22 ನೇ ಸಾಲಿನಲ್ಲಿ ಅನಧಿಕೃತ ಗಣಿಗಾರಿಕೆ ಹಾಗೂ ಅನಧಿಕೃತ ಕ್ರಷರ್ ಘಟಕ ಸ್ಥಾಪನೆ ಸಂಬಂಧ ದಾಖಲಿಸಿರುವ ಪ್ರಕರಣಗಳ ವಿವರ:

| ತಾಲ್ಲೂಕು | ಉಪ ಖನಿಜದ ವಿಧ | ಪತ್ತೆ ಹಚ್ಚಿದ ಅನಧಿಕೃತ ಗಣಿಗಾರಿಕೆ ಪ್ರಕರಣಗಳ ಸಂಖ್ಯೆ |
|---|---|---|
| ಮದ್ದೂರು | ಮುರಂ | 03 |
| ಶ್ರೀರಂಗಪಟ್ಟಣ | ಕಟ್ಟಡಕಲ್ಲು | 27 |
| ಪಾಂಡವಪುರ | ಕಟ್ಟಡಕಲ್ಲು | 12 |
| | ಅಲಂಕಾರಿಕ ಶಿಲೆ | 01 |
| ನಾಗಮಂಗಲ | ಕಟ್ಟಡಕಲ್ಲು | 01 |
| | ಅಲಂಕಾರಿಕ ಶಿಲೆ | 01 |
| ಒಟ್ಟು | | **45** |

| | | |
|---|---|---|
| ಆ) | ಮಂಡ್ಯ ಜಿಲ್ಲೆಯಲ್ಲಿ ಸಂಪೂರ್ಣವಾಗಿ ಗಣಿಗಾರಿಕೆಯನ್ನು ಸ್ಥಗಿತಗೊಳಿಸಲಾಗಿದೆಯೇ; | ಮಂಡ್ಯ ಜಿಲ್ಲೆಯಲ್ಲಿ ಅಧಿಕೃತವಾಗಿ ಪರವಾನಗಿ ಪಡೆದು ನಿಯಮಾನುಸಾರ ಗಣಿಗಾರಿಕೆ ನಡೆಸುತ್ತಿರುವ ಕಲ್ಲುಗಣಿ ಗುತ್ತಿಗೆಗಳ ಪ್ರದೇಶದಲ್ಲಿ ಗಣಿಗಾರಿಕೆಯನ್ನು ಸ್ಥಗಿತಗೊಳಿಸಿರುವುದಿಲ್ಲ.<br><br>ಆದರೆ, ಕಲ್ಲು ಗಣಿಗಾರಿಕೆಗೆ ಪರವಾನಗಿ ಪಡೆದು ಪರಿಸರ ತೀರುವಳಿ ಪತ್ರ ಪಡೆದು ಸಲ್ಲಿಸದೆ ಗಣಿಗಾರಿಕೆ ನಡೆಸುತ್ತಿದ್ದ 41 ಕಲ್ಲು ಗಣಿ ಗುತ್ತಿಗೆಗಳು ಹಾಗೂ ನಿಯಮ ಉಲ್ಲಂಘಿಸಿ ಗಣಿಗಾರಿಕೆ ನಡೆಸುತ್ತಿದ್ದ 01 ಕಲ್ಲು ಗಣಿಗುತ್ತಿಗೆ ಸೇರಿದಂತೆ ಒಟ್ಟು 42 ಕಲ್ಲು ಗಣಿಗುತ್ತಿಗೆಗಳನ್ನು ಜಿಲ್ಲಾ ಟಾಸ್ಕ್ ಫೋರ್ಸ್ (ಗಣಿ) ಸಮಿತಿ ಸಭೆಯಲ್ಲಿ ನಿರ್ಣಯ ಕೈಗೊಂಡು ರದ್ದುಪಡಿಸಲಾಗಿರುತ್ತದೆ. |
| ಇ) | ಗಣಿಗಾರಿಕೆಯನ್ನು ಸಂಪೂರ್ಣವಾಗಿ ಸ್ಥಗಿತಗೊಳಿಸಲು ಕಾರಣಗಳೇನು; (ವಿವರ ನೀಡುವುದು) | ಅಧಿಕೃತವಾಗಿ ಪರವಾನಗಿ ಪಡೆದು ನಿಯಮಾನುಸಾರ ಗಣಿಗಾರಿಕೆ ನಡೆಸುತ್ತಿರುವ ಕಲ್ಲು ಗಣಿ ಗುತ್ತಿಗೆಗಳ ಪ್ರದೇಶದಲ್ಲಿ ಗಣಿಗಾರಿಕೆಯನ್ನು ಸ್ಥಗಿತಗೊಳಿಸಿರುವುದಿಲ್ಲ. |
| ಈ) | ಗಣಿಗಾರಿಕೆ ಸ್ಥಗಿತಗೊಂಡಿರುವುದರಿಂದ ಮಂಡ್ಯ, ಮೈಸೂರು ಈ ಭಾಗದ ಜನಸಾಮಾನ್ಯರಿಗೆ ಗೃಹ ನಿರ್ಮಾಣ ಕಾರ್ಯಕ್ಕೆ ಮತ್ತು ಸರ್ಕಾರಿ ಕಾಮಗಾರಿಗಳಿಗೆ ಸಾಮಗ್ರಿಗಳ ಕೊರತೆ ಹಾಗೂ ಕಾರ್ಮಿಕರು ತೊಂದರೆಗೊಳಗಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮಂಡ್ಯ ಜಿಲ್ಲೆಯಲ್ಲಿ ಕಟ್ಟಡ ಕಲ್ಲು ಸಾಮಗ್ರಿಗಳ ಪೂರೈಕೆ ಆಗುತ್ತಿರುತ್ತದೆ. ಮಂಡ್ಯ ಜಿಲ್ಲೆಯಲ್ಲಿ 97 ಕಟ್ಟಡ ಕಲ್ಲು ಗಣಿಗುತ್ತಿಗೆಗಳು ಹಾಗೂ 27 ಕ್ರಷರ್ ಘಟಕಗಳು ಚಾಲ್ತಿಯಲ್ಲಿದ್ದು, ಸದರಿ ಗುತ್ತಿಗೆಗಳಿಂದ 2020-21ನೇ ಸಾಲಿನಲ್ಲಿ **18,98,832** ಮೆಟ್ರಿಕ್ ಟನ್‌ಗಳಷ್ಟು ಹಾಗೂ 2021-22ನೇ ಸಾಲಿನಲ್ಲಿ (08.09.2021 ರವರೆಗೆ) **9,47,625** ಮೆಟ್ರಿಕ್ ಟನ್ ಪರವಾನಗಿಗಳನ್ನು ವಿತರಿಸಲಾಗಿರುತ್ತದೆ.<br><br>ಇದಲ್ಲದೆ ಪಕ್ಕದ ಜಿಲ್ಲೆಗಳಾದ ರಾಮನಗರ, ತುಮಕೂರು, ಹಾಸನ ಹಾಗೂ ಚಾಮರಾಜನಗರ ಜಿಲ್ಲೆಗಳಿಂದಲೂ ಸಹ ಕಟ್ಟಡ ಕಲ್ಲು ಸಾಮಗ್ರಿಗಳು ದಿನನಿತ್ಯ ಈ ಭಾಗಕ್ಕೆ ಪೂರೈಕೆಯಾಗುತ್ತಿರುತ್ತದೆ. |
| ಉ) | ಯಾವ ಕಾಲಮಿತಿಯಲ್ಲಿ ಅಧಿಕೃತ ಗಣಿಗಾರಿಕೆಗಳನ್ನು ಪ್ರಾರಂಭಿಸಲು ಅವಕಾಶ ಕಲ್ಪಿಸಲಾಗುವುದು? | ಉದ್ಭವಿಸುವುದಿಲ್ಲ. |

ಸಂಖ್ಯೆ ಸಿಐ 442 ಎಂಎಂಎನ್ 2021

(ಆಚಾರ್ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ
ಮತ್ತು ಮಕ್ಕಳ ಅಭಿವೃದ್ಧಿ, ಮತ್ತು
ವಿಕಲಚೇತನರ, ಹಿರಿಯ ನಾಗರಿಕರ
ಸಬಲೀಕರಣ ಸಚಿವರು